# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 141

ಮಾನ್ಯ ಸದಸ್ಯರ ಹೆಸರು : ಶ್ರೀ ಸಿ.ಎಂ.ಇಬ್ರಾಹಿಂ (ವಿಧಾನ ಸಭೆಯಿಂದ ಚುನಾಯಿತರದವರು)

ಉತ್ತರಿಸಬೇಕಾದ ದಿನಾಂಕ : 13-9-2021

ಉತ್ತರಿಸುವ ಸಚಿವರು : ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಕರ್ನಾಟಕ ರಾಜ್ಯಕ್ಕೆ ಕೇಂದ್ರ ಸರ್ಕಾರದಿಂದ ಇದುವರೆಗೂ ಎಷ್ಟು ಪ್ರಮಾಣದಲ್ಲಿ ಕೋವಿಡ್-19 ಲಸಿಕೆ ಪೂರೈಸಲಾಗಿದೆ; ರಾಜ್ಯಕ್ಕೆ ಹಂಚಿಕೆ ಮಾಡುವ ಲಸಿಕೆಗಳ ಪ್ರಮಾಣಕ್ಕೆ ಏನಾದರೂ ಮಾನದಂಡವಿದೆಯೇ; (ರಾಜಯದಲ್ಲಿ ಇದುವರೆಗೂ 1st Dose & 2nd Dose ಪಡೆದವರ ವಿಧಾನಸಭಾ ಕ್ಷೇತ್ರವಾರು ಮತ್ತು ಬಿಬಿಎಂಪಿಯ ವಾರ್ಡ್‌ವಾರು ಮಾಹಿತಿ ಒದಗಿಸುವುದು) | ರಾಜ್ಯಕ್ಕೆ ಇದುವರೆಗೂ ಒಟ್ಟು 4,13,80,710.00 ಡೋಸ್‌ಗಳು ಸರಬರಾಜಾಗಿರುತ್ತವೆ. ಅವುಗಳಲ್ಲಿ 3,64,56,050 ಡೋಸ್ ಕೋವಿಶೀಲ್ಡ್ ಮತು 49,24,660 ಡೋಸ್ ಕೋವ್ಯಾಕ್ಸಿನ್. ಭಾರತ ಸರ್ಕಾರದಿಂದ ರಾಜ್ಯಗಳಿಗೆ ಯಾವ ಮಾನದಂಡದ ಮೇಲೆ ಲಸಿಕೆ ಹಂಚಿಕೆ ಮಾಡಲಾಗುತ್ತಿದೆ ಎನ್ನುವ ಮಾಹಿತಿ ರಾಜ್ಯಕ್ಕೆ ಇರುವುದಿಲ್ಲ.<br>ಕೋವಿಡ್-19 ಲಸಿಕಾಕರಣದ ಪ್ರಗತಿಯನ್ನು ಸಕಾಲಿಕವಾಗಿ ನೋಂದಾಯಿಸಲು ಮತ್ತು ಇತರೆ ಲಸಿಕಾಕರಣದ ವರದಿಯನ್ನು ಸಮಯೋಚಿತವಾಗಿ ಪಡೆಯಲು ಭಾರತ ಸರ್ಕಾರವು **ಕೋವಿನ್ ಪೋರ್ಟಲ್** (http://www.cowin.gov.in) ಅನ್ನು ಅಭಿವೃದ್ಧಿಗೊಳಿಸಿದೆ. ಕೋವಿನ್ ಪೋರ್ಟಲ್ ನಲ್ಲಿ ಜಿಲ್ಲಾವಾರು ಮತ್ತು ಲಸಿಕಾ ಕೇಂದ್ರಗಳವಾರು ವರದಿಯನ್ನು ಪಡೆಯಲು ಮಾತ್ರ ಸಾಧ್ಯವಾಗುತ್ತದೆ. ಆದ್ದರಿಂದ, ವಿಧಾನ ಸಭಾ ಕ್ಷೇತ್ರವಾರು ಮತ್ತು ಬಿಬಿಎಂಪಿ ವಾರ್ಡ್ ವಾರು ಲಸಿಕಾಕರಣದ ಪ್ರಗತಿ ಕೋವಿನ್ ಪೋರ್ಟಲ್‌ನಲ್ಲಿ ದೊರೆಯುವುದಿಲ್ಲ (ಜಿಲ್ಲಾವಾರು ಪ್ರಗತಿ ಲಗತ್ತಿಸಿದೆ). |
| ಆ | ಕೋವಿಡ್-19 ಲಸಿಕೆಗಳನ್ನು ರಾಜ್ಯದ ಸರ್ಕಾರಿ ಆಸ್ಪತ್ರೆ, ಆರೋಗ್ಯ ಕೇಂದ್ರಗಳು & ಖಾಸಗಿ ಆಸ್ಪತ್ರೆಗಳಿಗೆ ಯಾವ ಮಾನದಂಡದಲ್ಲಿ ಹಂಚಿಕೆ ಮಾಡಲಾಗುವುದು; ಅರ್ಹ ಇರುವ ಪ್ರತಿಯೊಬ್ಬರಿಗೂ ಉಚಿತವಾಗಿ ಲಸಿಕೆ ನೀಡುವ ಘೋಷಣೆಯಾಗಿದ್ದರು ಸಹ, ಖಾಸಗಿ ಆಸ್ಪತ್ರೆಗಳ ಮೂಲಕ ಉಚಿತ ಲಸಿಕೆ ನೀಡುವ ಬದಲು ದರ ನಿಗಧಿಪಡಿಸಿ ಪಾವತಿ ಆಧಾರದ ಮೇಲೆ ಲಸಿಕೆ ನೀಡುತ್ತಿರುವುದರ ಉದ್ದೇಶವೇನು; | ಜಿಲ್ಲೆಗಳಿಗೆ ಲಸಿಕೆಗಳನ್ನು ಈ ಕೆಳಕಂಡ ಮಾನದಂಡಗಳ ಆಧಾರದ ಮೇಲೆ ಹಂಚಿಕೆ ಮಾಡಲಾಗುತ್ತಿದೆ:<br>✓ 18 ವರ್ಷ ಮೇಲ್ಪಟ್ಟ ಅರ್ಹ ಫಲಾನುಭವಿಗಳ ಸಂಖ್ಯೆ.<br>✓ 2ನೇ ಡೋಸ್‌ಗೆ ಬಾಕಿ ಇರುವ ಫಲಾನುಭವಿಗಳ ಸಂಖ್ಯೆ.<br>✓ ಒಂದೂ ಡೋಸ್ ಪಡೆಯದ ಆರೋಗ್ಯ ಕಾರ್ಯಕರ್ತರು ಮತ್ತು ಮುಂಚೂಣಿ ಕಾರ್ಯಕರ್ತರ ಸಂಖ್ಯೆ.<br>✓ ಗಡಿ ಪ್ರದೇಶಗಳ ಫಲಾನುಭವಿಗಳು.<br>✓ ಜಿಲ್ಲೆಗಳಲ್ಲಿ ಲಭ್ಯವಿರುವ ಲಸಿಕಾ ದಾಸ್ತಾನು.<br>ಮೇ 1, 2021 ರ ಕೋವಿಡ್-19 ಲಸಿಕಾಕರಣದ ಮಾರ್ಗಸೂಚಿಯ ಪ್ರಕಾರ ಲಸಿಕಾ ತಯಾರಕರು ತಯಾರಿಸಿದ ಲಸಿಕೆಗಳಲ್ಲಿ ಶೇ. 50 ಭಾರತ ಸರ್ಕಾರದ ಖರೀದಿಗಾಗಿ ಮೀಸಲಿಡುವುದು ಮತ್ತು ಉಳಿದ ಶೇ. 50 ರಲ್ಲಿ 18 ರಿಂದ 44 ವರ್ಷ ಫಲಾನುಭವಿಗಳ ಲಸಿಕಾಕರಣಕ್ಕಾಗಿ ಶೇ 25 ರಷ್ಟು ರಾಜ್ಯ ಸರ್ಕಾರ ಖರೀದಿಸುವುದು ಹಾಗೂ ಶೇ 25 ರಷ್ಟು ಖಾಸಗಿ ಆರೋಗ್ಯ ಕೇಂದ್ರಗಳು ಖರೀದಿಸುವುದಾಗಿ ಸೂಚಿಸಿರುತ್ತಾರೆ. ಜೂನ್ 21, 2021 ಪರಿಷ್ಕೃತ ಲಸಿಕಾಕರಣದ ಮಾರ್ಗಸೂಚಿಯನ್ವಯ ಲಸಿಕಾ ತಯಾರಕರು |

| | | |
|---|---|---|
| | | ತಯಾರಿಸಿದ ಶೇ 75 ರಷ್ಟು ಲಸಿಕೆಯನ್ನು ಭಾರತ ಸರ್ಕಾರವೇ ಖರೀದಿಸಿ 18 ವರ್ಷ ಮೇಲ್ಪಟ್ಟವರಿಗೆ ಸರ್ಕಾರಿ ಕೋವಿಡ್ ಲಸಿಕಾ ಕೇಂದ್ರಗಳಲ್ಲಿ ಉಚಿತವಾಗಿ ಲಸಿಕಾಕರಣ ನಡೆಸಲು ರಾಜ್ಯಗಳಿಗೆ ಲಸಿಕೆ ಸರಬರಾಜು ಮಾಡುತ್ತಿದೆ ಹಾಗೂ ಖಾಸಗಿ ಆಸ್ಪತ್ರೆಗಳಲ್ಲಿ ಭಾರತ ಸರ್ಕಾರ ನಿಗದಿಪಡಿಸಿರುವ ಬೆಲೆಯಲ್ಲಿ ಲಸಿಕೆಗಳನ್ನು ಖರೀದಿಸಿ ಲಸಿಕಾಕರಣ ನಡೆಸಲು ಸೂಚಿಸಲಾಗಿದೆ. |
| ಇ | ಪ್ರಸ್ತುತ ನೀಡುತ್ತಿರುವ ಕೋವಿಡ್-19 ಶಾಟ್‌ಗಳು ಹೊಸ ರೂಪಾಂತರದಲ್ಲಿ ಕಡಿಮೆ ಪರಿಣಾಮಕಾರಿತ್ವ ಬಗ್ಗೆ ಹೆಚ್ಚುವರಿ ಲಸಿಕೆ (Booster Doses) ಅವಶ್ಯಕತೆ ಕುರಿತು ಸಾರ್ವಜನಿಕ ಚರ್ಚೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸರ್ಕಾರದ ಕ್ರಮವೇನು | ಭಾರತ ಸರ್ಕಾರದಿಂದ ಹೆಚ್ಚುವರಿ ಲಸಿಕೆ ನೀಡುವ ಕುರಿತು ಯಾವುದೇ ಮಾರ್ಗಸೂಚಿ ಬಂದಿರುವುದಿಲ್ಲ. ರಾಜ್ಯವು ಭಾರತ ಸರ್ಕಾರದ ಮಾರ್ಗಸೂಚಿಯನ್ನು ಪಾಲಿಸಬೇಕಾಗುತ್ತದೆ. ಹೆಚ್ಚುವರಿ ಲಸಿಕೆ ನೀಡುವ ಕುರಿತು ಮಾರ್ಗಸೂಚಿ ಬಂದಲ್ಲಿ ಅದರಂತೆ ಕ್ರಮ ಕೈಗೊಳ್ಳಲಾಗುವುದು. |
| ಈ | ರಾಜ್ಯದಲ್ಲಿ ಇದುವರೆವಿಗೂ ಎಷ್ಟು ಜನ ಕೋವಿಡ್ ವಾರಿಯರ್ಸ್‌ಗಳು ಕೋವಿಡ್-19 ತುತ್ತಾಗಿ ಮೃತರಾಗಿದ್ದಾರೆ; ಮೃತರಲ್ಲಿ ರಾಜ್ಯ ಸರ್ಕಾರವು ಎಷ್ಟು ಜನರಿಗೆ ಪರಿಹಾರ ನೀಡಿದೆ; (ಸಂಪೂರ್ಣ ಅಂಕಿ ಅಂಶಗಳನ್ನು ಒದಗಿಸುವುದು); ಪರಿಹಾರ ನೀಡದಿರುವ ಪ್ರಕರಣಗಳೆಷ್ಟು; (ಸಂಪೂರ್ಣ ಮಾಹಿತಿ ಒದಗಿಸುವುದು). | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ದಿನಾಂಕ 01-04-2020 ರಿಂದ ದಿನಾಂಕ 24-03-2021 ರವರೆಗೆ ಮೊದಲನೇ ಅಲೆಯಲ್ಲಿ ಮರಣ ಹೊಂದಿರುವ ಕೋವಿಡ್ ವಾರಿಯರ್ಸ್‌ಗಳ ವಿಮಾ ಪ್ರಸ್ತಾವನೆಗಾಗಿ ಬಂದಿರುವ ಸಂಖ್ಯೆ - 144 ಗಳಾಗಿದ್ದು, ಈ ಪೈಕಿ 82 ವಾರಿಯರ್ಸ್ ಕುಟುಂಬಗಳಿಗೆ ಪ್ರಧಾನ ಮಂತ್ರಿ ಗರೀಬ್ ಕಲ್ಯಾಣ ವಿಮಾ ಯೋಜನೆಯಡಿಯಲ್ಲಿ ನಿಯಮಾನುಸಾರ ಪರಿಶೀಲಿಸಿ ತಲಾ 50 ಲಕ್ಷ ರೂ ಪರಿಹಾರವನ್ನು ನೀಡಿದೆ. ಮುಂದುವರೆದು 62 ಪ್ರಕರಣಗಳು ಕೋವಿಡ್ ರೋಗಿಗಳ ಚಿಕಿತ್ಸೆಯಲ್ಲಿ ನೇರವಾಗಿ ಭಾಗಿಯಾಗದ ಕಾರಣ ಪ್ರಸ್ತಾವನೆ ತಿರಸ್ಕರಿಸಲಾಗಿದೆ. ಅನುಬಂಧ-1 ರಲ್ಲಿ ಲಗತ್ತಿಸಿದೆ.<br>ಮುಂದುವರೆದು, ಎರಡನೇ ಅಲೆಯಲ್ಲಿ ದಿನಾಂಕ 24-04-2021 ರಿಂದ ಇದುವರೆಗೂ 28 ಕೋವಿಡ್ ವಾರಿಯರ್ಸ್‌ಗಳು ಮರಣ ಹೊಂದಿದ್ದು, ವಿಮಾ ಸೌಲಭ್ಯಕ್ಕಾಗಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಗಳು ಪರಿಶೀಲನಾ ಹಂತದಲ್ಲಿದೆ. |
| ಉ | ಕೋವಿಡ್-19ಗೆ ವಯಸ್ಕ ಸದಸ್ಯರನ್ನು ಕಳೆದುಕೊಂಡ ಬಡತನ ರೇಖೆಗಿಂತ ಕೆಳಗಿರುವ (BPL) ಕುಟುಂಬಗಳಿಗೆ ರಾಜ್ಯ ಸರ್ಕಾರ ತಲಾ 1 ಲಕ್ಷ ಪರಿಹಾರವನ್ನು ಘೋಷಿಸಿದ್ದು, ಈ ಸಂಬಂಧ ಪರಿಹಾರ ಕೋರಿ ಎಷ್ಟು ಅರ್ಜಿಗಳು ಸಲ್ಲಿಕೆಯಾಗಿದೆ; ಎಷ್ಟು ಕುಟುಂಬಗಳಿಗೆ ಪರಿಹಾರ ನೀಡಲಾಗಿದೆ? (ಸಂಪೂರ್ಣ ಮಾಹಿತಿ ಒದಗಿಸುವುದು). | ಕೋವಿಡ್ ನಿಂದ ಮೃತ ಹೊಂದಿದ ಬಿ.ಪಿ.ಎಲ್. ಕುಟುಂಬದ ದುಡಿಯುವ ವ್ಯಕ್ತಿಯ ಕುಟುಂಬಕ್ಕೆ ಪರಿಹಾರ ವಿತರಣೆ ಕುರಿತಂತೆ ರಾಜ್ಯದಲ್ಲಿ ಒಟ್ಟು 7,711 ಅರ್ಜಿಗಳು ಸ್ವೀಕೃತವಾಗಿದ್ದು, ಜಿಲ್ಲಾವಾರು ಮಾಹಿತಿಯನ್ನು ಅನುಬಂಧ-2 ರಲ್ಲಿ ಲಗತ್ತಿಸಿದೆ.<br>ಪರಿಹಾರ ಕೋರಿಕೆ ಅರ್ಜಿಗಳ ಕ್ಷೇತ್ರ ಪರಿಶೀಲನಾ ಕಾರ್ಯಪ್ರಗತಿಯಲ್ಲಿದ್ದು, ವರದಿ ಆಧಾರದ ಮೇಲೆ ಪರಿಹಾರ ವಿತರಿಸಲಾಗುವುದು. |

ಆಕುಕ 92 ಎಸ್‌ಎಂಎಂ 2021

(ಡಾ: ಕೆ.ಸುಧಾಕರ್)

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ

ವೈದ್ಯಕೀಯ ಶಿಕ್ಷಣ ಸಚಿವರು

ಅನುಬಂಧ-1

**PMGKY Insurance - Summary of Claims (1st Wave)**

| SL No | Claims of Department | Total Received | Approved by GOI | Rejected/ withdrawn |
|---|---|---|---|---|
| | | | | |
| 1 | Health Department | 91 | 71 | 20 |
| 2 | BBMP | 16 | 0 | 16 |
| 3 | Other Departments | 13 | 0 | 13 |
| 4 | Private Hospital | 11 | 9 | 2 |
| 5 | Nursing Homes/Clinic | 11 | 0 | 11 |
| 6 | ESI Hospital | 1 | 1 | 0 |
| 7 | Railway Hospital | 1 | 1 | 0 |
| | **Total** | **144** | **82** | **62** |

ಜಂಟಿ ನಿರ್ದೇಶಕರು (ವೈದ್ಯಕೀಯ)
ಆರೋಗ್ಯ ಮತ್ತು ಕು.ಕ. ಸೇವೆಗಳ ನಿರ್ದೇಶನಾಲಯ
ಆರೋಗ್ಯಸೌಧ, ಮಾಗಡಿ ರಸ್ತೆ, ಬೆಂಗಳೂರು-23

ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಸಿ.ಎಂ ಇಬ್ರಾಹಿಂ (ವಿಧಾನ ಸಭೆಯಿಂದ ಚುನಾಯಿತರಾದವರು) ಇವರ ಪ್ರ.ಸಂ.43(141)ಕ್ಕೆ ಅನುಬಂಧ - ೨

| ಕ್ರ.ಸಂ | ಜಿಲ್ಲೆ | ಸ್ವೀಕೃತವಾದ ಅರ್ಜಿಗಳ ಸಂಖ್ಯೆ |
|---|---|---|
| 1 | ಬಾಗಲಕೋಟೆ | 38 |
| 2 | ಬಳ್ಳಾರಿ | 254 |
| 3 | ಬೆಂಗಳೂರು | 950 |
| 4 | ಬೆಳಗಾವಿ | 84 |
| 5 | ಬೆಂಗಳೂರು ನಗರ | 445 |
| 6 | ಬೀದರ್ | 212 |
| 7 | ಚಾಮರಾಜನಗರ | 235 |
| 8 | ಚಿಕ್ಕಬಳ್ಳಾಪುರ | 85 |
| 9 | ಚಿಕ್ಕಮಗಳೂರು | 18 |
| 10 | ಚಿತ್ರದುರ್ಗ | 181 |
| 11 | ದಕ್ಷಿಣ ಕನ್ನಡ | 137 |
| 12 | ದಾವಣಗೆರೆ | 240 |
| 13 | ಧಾರವಾಡ | 434 |
| 14 | ಗದಗ | 192 |
| 15 | ಹಾಸನ | 443 |
| 16 | ಹಾವೇರಿ | 196 |
| 17 | ಕಲ್ಬುರ್ಗಿ | 67 |
| 18 | ಕೊಡಗು | 160 |
| 19 | ಕೋಲಾರ | 396 |
| 20 | ಕೊಪ್ಪಳ | 633 |
| 21 | ಮಂಡ್ಯ | 399 |
| 22 | ಮೈಸೂರು | 783 |
| 23 | ರಾಯಚೂರು | 91 |
| 24 | ರಾಮನಗರ | 267 |
| 25 | ಶಿವಮೊಗ್ಗ | 146 |
| 26 | ತುಮಕೂರು | 317 |
| 27 | ಉಡುಪಿ | 20 |
| 28 | ಉತ್ತರಕನ್ನಡ | 155 |
| 29 | ವಿಜಯಪುರ | 73 |
| 30 | ಯಾದಗಿರಿ | 60 |
| ಒಟ್ಟು | | **7711** |